# ನಾನು ಮುಖ್ಯ | ತರಗತಿಯಲ್ಲಿ ಮಕ್ಕಳ ಧ್ವನಿ ಮತ್ತು ಉಪಸ್ಥಿತಿ

ಮಧುಮಿತಾ ಆರ್.



ಮಹಾ ಸಾಂಕ್ರಮಿಕ ರೋಗದ ನಂತರದ ಸಂದರ್ಭದಲ್ಲಿ ನಾನು, ಕಲಿಕೆಯ ಕುರಿತಾದ ಆಸಕ್ತಿಯನ್ನು ಮರಳಿ ಪಡೆಯುವಂತೆ ಮಕ್ಕಳನ್ನು ತೊಡಗಿಸಿಕೊಳ್ಳಲು ಪರಿಣಾಮಕಾರಿಯಾದ ಮಾಧ್ಯಮಗಳನ್ನು ಹುಡುಕುತ್ತಿದ್ದೇನೆ. ತರಗತಿಯೊಳಗೆ ಸುಲಭವಾಗಿ ಹಾಗೂ ವಿನೋದಮಯವಾಗಿ ಮಕ್ಕಳೊಂದಿಗೆ ತೊಡಗಿಕೊಳ್ಳಲು ಎಂದಿಗೂ ಸಹ ನನ್ನ ಆಯ್ಕೆಯ ಅಭಿವ್ಯಕ್ತಿ ಮಾಧ್ಯಮ ಎಂದರೆ ಆಟ ಮತ್ತು ರಂಗಭೂಮಿ ಆಧಾರಿತ ಚಟುವಟಿಕೆಗಳೇ. ಮಕ್ಕಳ ಪ್ರಥಮ ಭಾಷೆಯು ಬುಂದೇಲ್ಖಂಡಿ ಆಗಿರುವ ಪ್ರದೇಶದಲ್ಲಿ ಕೆಲಸ ಮಾಡುತ್ತಿರುವ ದಕ್ಷಿಣ ಭಾರತೀಯಳಾದ ನನಗೆ ಆಂಗಿಕ ಚಲನೆ ಮತ್ತು ಮುಖಭಾವದ ಅಭಿವ್ಯಕ್ತಿಗಳು ಭಾಷೆಯ ತಡೆಗೋಡೆಯನ್ನು ಮುರಿಯಲು ನೆರವಾಗಿವೆ. ನನ್ನ ತರಗತಿ ಕಾರ್ಯಚಟುವಟಿಕೆಯ ಆರಂಭಿಕ ದಿನಗಳಲ್ಲಿ ನಾನು ಮಕ್ಕಳು ಸದಾಕಾಲವು ತನ್ಮಯತೆಯಿಂದ ತೊಡಗಿಕೊಂಡಿರುವಂತೆ ನೋಡಿಕೊಳ್ಳಲು ಹಾಗೂ ತರಗತಿಯ ಉತ್ಸಾಹ ಯಾವಾಗಲೂ ಮೇಲ್ಮಟ್ಟದಲ್ಲಿಯೇ ಇರುವುದನ್ನು ಖಾತ್ರಿಪಡಿಸಿಕೊಳ್ಳಲು ವಿಭಿನ್ನ ಮಾದರಿಯ ಲಘು ವ್ಯಾಯಾಮ ಹಾಗೂ ತರಗತಿಯ ಮಧ್ಯದಲ್ಲಿ ವಿಭಿನ್ನ ಚಟುವಟಿಕೆಗಳನ್ನು ನಡೆಸುತ್ತಿದ್ದೆ. ಆತ್ಮವಿಶ್ವಾಸ, ತಂಡದಲ್ಲಿ ಒಟ್ಟಿಗೆ ಕೆಲಸ ಮಾಡುವುದು, ಕಠಿಣ ಪರಿಶ್ರಮ, ಒಗ್ಗಟ್ಟು, ಹೊಂದಾಣಿಕೆ ಮುಂತಾದ ಗುಣಗಳನ್ನು ಬೆಳೆಸುವಲ್ಲಿ ಈ ಮಾಧ್ಯಮಗಳು ಹೇಗೆ ಸೂಕ್ಷ್ಮವಾಗಿ ಕೆಲಸ ಮಾಡುತ್ತವೆ ಎಂಬ, ಈಗಾಗಲೇ ಗೊತ್ತಿರುವ ಅಂಶಗಳಲ್ಲದೆ, ಇದು ತರಗತಿಯಲ್ಲಿ ಸ್ವತಹ ಮತ್ತು ಗುಂಪಿನ ಚಟುವಟಿಕೆಗಳಲ್ಲಿ ಚೆನ್ನಾಗಿ ಭಾಗವಹಿಸುವುದನ್ನು ಕಲಿಸಿ ಮಗುವು ಸಂತೋಷಕರವಾದ ಸಾಮಾಜಿಕ ಅನುಭವವನ್ನು ಪಡೆದುಕೊಳ್ಳಲಿಕ್ಕೆ ಹಾಗೂ ಸಮವಯಸ್ಕರೊಂದಿಗೆ ಹೆಚ್ಚು ಆರೋಗ್ಯಕರವಾದ ಅಂತರ್ವ್ಯಕ್ತಿ ಸಂಬಂಧವನ್ನು ಹೊಂದಲಿಕ್ಕೆ ನೆರವಾಗುತ್ತದೆ. ಈ ಸಾಮಾಜಿಕ ಕೌಶಲಗಳನ್ನು ಗಳಿಸಿಕೊಳ್ಳುವುದು ಮಗುವಿನ ಸಾಮಾಜಿಕ ಹಾಗೂ ಜ್ಞಾನಗ್ರಹಿಸುವಿಕೆಯ ಅಭಿವೃದ್ಧಿಗೆ ದಾರಿ ಮಾಡಿಕೊಡುತ್ತದೆ. ಇವುಗಳ ಮೂಲಕ ಮಕ್ಕಳು ತಮ್ಮ ಬಗ್ಗೆ, ತಮ್ಮ ಶಕ್ತಿ ದೌರ್ಬಲ್ಯಗಳ ಬಗ್ಗೆ ಹೆಚ್ಚುಹೆಚ್ಚು ಅರಿತುಕೊಳ್ಳುತ್ತಾರೆ ಮತ್ತು ಮಾರ್ಗರೆಟ್ ಮೀಡ್ ಹೇಳಿದಂತೆ ಮಗು "ತನ್ನತನದ ಪ್ರಜ್ಞೆಯನ್ನು ನಿರ್ಮಿಸಿಕೊಳ್ಳುವಲ್ಲಿ" ಅವು ನೆರವಾಗುತ್ತವೆ.

## ಸರ್ಕಲ್ ಟೈಮ್

ಏಕತಾನತೆ ಪ್ರವೇಶಿಸದಂತೆ ಸಾಕಷ್ಟು ವೈವಿಧ್ಯತೆಯಿಂದ ಕೂಡಿದ್ದ ಈ ಎರಡು ಮಾಧ್ಯಮಗಳಲ್ಲಿ ಪ್ರತಿದಿನವೂ ತೊಡಗಿಕೊಳ್ಳುತ್ತಿದ್ದ ನನ್ನ ಶಾಲಾ ಅನುಭವವನ್ನು ನೆನಪಿಗೆ ತಂದುಕೊಂಡು ನಾನು, ಮಕ್ಕಳು ಯಾವುದನ್ನು ತರಗತಿಯಲ್ಲಿ ಮಾಡಬಾರದು ಎಂದು ಹೇಳಲಾಗುತ್ತದೋ ಅಂತಹ ಚಟುವಟಿಕೆಗಳಲ್ಲಿ ಎಂದರೆ, ವೃತ್ತಾಕಾರವಾಗಿ ನಿಲ್ಲುವುದು, ಅನಿರ್ಬಂಧಿತವಾಗಿ ಕೈಕಾಲು ಆಡಿಸುವುದು, ಮಾತನಾಡುವುದು, ಹಾಡುವುದು ಅಥವಾ ಆಂಗಿಕ ಚಲನೆಯೊಂದಿಗೆ ವಾಚನ ಮಾಡುವುದು ಇವೆಲ್ಲವುಗಳಲ್ಲಿ ಆಸಕ್ತಿ ತೋರಿಸುತ್ತಾರೆ ಎಂಬುದನ್ನು ಗಮನಿಸಿದೆ! ಆರಂಭದ ಹಂತಗಳಲ್ಲಿ ನಾನು ಪಾಠ ಮಾಡುವುದು ಮತ್ತಿತರ ಎಲ್ಲಾ ಚಟುವಟಿಕೆಗಳನ್ನು ವೃತ್ತಾಕಾರದಲ್ಲಿ ಅವರೊಂದಿಗೆ ಕುಳಿತುಕೊಂಡೇ ನಿರ್ವಹಿಸಿದೆ.

ನಾನು ನನ್ನ ತರಗತಿಯನ್ನು ಮೊಟ್ಟಮೊದಲಿಗೆ ಪರಸ್ಪರ ಪರಿಚಯ ಮಾಡಿಕೊಳ್ಳುವ ಚಟುವಟಿಕೆ ಮೂಲಕ ಆರಂಭಿಸಿದೆ; ಎಲ್ಲರೂ ವೃತ್ತಾಕಾರದಲ್ಲಿ ನಿಂತು, ಒಬ್ಬರಾದ ಮೇಲೆ ಒಬ್ಬರಂತೆ ಯಾವುದಾದರೊಂದು ಆಂಗಿಕ ಚಲನೆಯೊಂದಿಗೆ ನಮ್ಮನ್ನು ನಾವೇ ಪರಿಚಯಿಸಿಕೊಂಡೆವು. ನಾನು ಮತ್ತು ಅವರ ತರಗತಿ ಶಿಕ್ಷಕರು ಮೊದಲು ನಮ್ಮನ್ನು ಪರಿಚಯಿಸಿಕೊಂಡ ನಂತರವೂ ಆರಂಭದಲ್ಲಿ ಮಕ್ಕಳು ಸಂಕೋಚದಿಂದಲೇ ಇದ್ದರು. ಆದ್ದರಿಂದ ನಾನು ಏನಾದರೂ ಆಂಗಿಕ ಚಲನೆಯ ಮೂಲಕ ಪರಿಚಯಿಸಿಕೊಳ್ಳಿ ಎಂದು ಅವರನ್ನು ಆಗ್ರಹಿಸಿ ಪ್ರೇರೇಪಿಸಿದೆ ಮತ್ತು ತಮ್ಮನ್ನೇ ಪರಿಚಯಿಸಿಕೊಳ್ಳಲು ಯಾವುದಾದರೂ ಆಂಗಿಕ ಚಲನೆಯನ್ನು ಅಳವಡಿಸಿಕೊಳ್ಳಲು ಸಂಕೋಚ-ಪಡುತ್ತಿದ್ದವರಿಗೆ ನಾನೇ ನೆರವು ನೀಡಿದೆ. ಎಲ್ಲರೂ ಇದರಲ್ಲಿ ತೊಡಗಿಕೊಳ್ಳುವಂತೆ ಮಾಡಲು ನಾನು ಉಳಿದವರಿಗೆ ಎಲ್ಲರೂ ಒಟ್ಟಾಗಿ "ನಿನ್ನ ಹೆಸರೇನು" ಎಂದು ಕೇಳಬೇಕು ಎಂದು ತಿಳಿಸಿದೆ. ಪ್ರತಿಯೊಂದು ಮಗುವೂ ಒಂದು ಆಂಗಿಕ ಚಲನೆ ಮತ್ತು ಧ್ವನಿಯ ಏರಿಳಿತದೊಂದಿಗೆ, "ನನ್ನ ಹೆಸರೇನೆಂದರೆ. . . . " ಎಂದು ಉತ್ತರಿಸಬೇಕಿತ್ತು. ಆದರೆ ಅದರಲ್ಲಿದ್ದ ವಿನೋದಶೀಲತೆ ಅಲ್ಲಿಗೆ ಮುಗಿಯಲಿಲ್ಲ. ಯಾವುದೇ ಮಗು ತನ್ನನ್ನೇ ಪರಿಚಯಿಸಿಕೊಂಡ ಕ್ರಿಯೆಯನ್ನು ಅನುಕರಿಸಲು ಉಳಿದ ಮಕ್ಕಳಿಗೆ ಹೇಳಲಾಯಿತು. ಹೆಸರುಗಳನ್ನು ನೆನಪಿಟ್ಟುಕೊಳ್ಳುವುದಕ್ಕೂ ಇದು ನೆರವಾಯಿತು. ಹೀಗಾಗಿ, ಒಂದು ಮಗು "ನನ್ನ ಹೆಸರು ಸೌಮ್ಯ" ಎಂದು ಹೇಳುತ್ತಾ ಆಗಸದಲ್ಲಿ ಹಾರುವ ದೇವತೆಯಂತೆ ಅಭಿನಯಿಸಿದಾಗ, ಎಲ್ಲ ಮಕ್ಕಳು ಅವಳ ಹಾರುವ ಅಭಿನಯವನ್ನು ಅನುಕರಿಸಿ, "ನನ್ನ ಹೆಸರು ಸೌಮ್ಯ" ಎಂದರು.

ನಾನು ತಮಾಷೆಯಾಗಿ ಅವರನ್ನು "ನಿಮ್ಮ ಹೆಸರು ಸೌಮ್ಯ ಎಂದೇ? ಎಂದು ಕೇಳಿದೆ. ಎಲ್ಲ ಮಕ್ಕಳು ಕಿಲಕಿಲನೆ ನಗಲಾರಂಭಿಸಿದವು; ನಾನು ಆಗ ಸೌಮ್ಯಳತ್ತ ಬೊಟ್ಟು ಮಾಡಿ ತೋರಿಸಿ "ನಿನಗೇನು ಹೇಳಲಿಕ್ಕಿದೆ?" ಎಂದೆ. ಆಗ ಸರಿಯಾದ

ಉತ್ತರ ಬಂತು "ಅವಳ ಹೆಸರು ಸೌಮ್ಯ"!. ಮಕ್ಕಳು ಒಬ್ಬರು ಇನ್ನೊಬ್ಬರ ಹೆಸರನ್ನು ಕಲಿಯುತ್ತಾ ಮತ್ತು ತರಗತಿಯಲ್ಲಿ ಸಾಮಾನ್ಯವಾಗಿ ಮಾತನಾಡದವರನ್ನೂ ತೊಡಗಿಸಿಕೊಳ್ಳುತ್ತಾ ಈ ಚಟುವಟಿಕೆ ಮುಂದುವರೆಯಿತು. ತರಗತಿಯಲ್ಲಿ ಹೆಚ್ಚಾಗಿ ತೊಡಗಿಕೊಳ್ಳದ ಮಕ್ಕಳು ಈ ಚಟುವಟಿಕೆಗಳ ಮೂಲಕ ತೊಡಗಿಸಿಕೊಂಡಿದ್ದನ್ನು ಕಂಡು ಅವರ ತರಗತಿಯ ಶಿಕ್ಷಕಿಗೂ ಸಂತೋಷವಾಯಿತು. ಇಂತಹ ಚಟುವಟಿಕೆಗಳು ನಮ್ಮ ಒಳಗಿನ ಅಭೀಪ್ಸೆಗಳ ಅಭಿವ್ಯಕ್ತಿಯಾಗಿರುತ್ತವೆ ಎಂದು ನಾನು ಬಲವಾಗಿ ನಂಬಿದ್ದೇನೆ ಮತ್ತು ಕೆಲವೊಂದು ಆಟಗಳಲ್ಲಿ/ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದರಲ್ಲಿ ಒಂದು ಆನಂದದ ಅನುಭವ ಮತ್ತು ತೃಪ್ತಿ ಇದ್ದು ಅದನ್ನು ಮಕ್ಕಳು ಅನುಭವಿಸುತ್ತಾರೆ.

## ಸುರಕ್ಷಿತ ಆವರಣವನ್ನು ಕಲ್ಪಿಸುವುದು

ಒಂದು ದಿನ ನಾನು ಶಾಲೆಯು ಆರಂಭವಾದ ಮೇಲೆ ಮೊದಲ ಕೆಲವು ಗಂಟೆಗಳನ್ನು ಶಿಕ್ಷಕರೊಂದಿಗೆ ಹಾಗೂ ಮುಖ್ಯೋ-ಪಾಧ್ಯಾಯಿನಿಯವರೊಂದಿಗೆ ಕಳೆದು ತರಗತಿಗೆ ತಡವಾಗಿ ಹೋದೆ. ಆದ್ದರಿಂದ ನಾವು ಕೂಡಲೇ ನಮ್ಮ ಪಠ್ಯದ ಕೆಲಸವನ್ನು ಆರಂಭಿಸಿದೆವು. ಒಂದು ಮಗು ದಿಢೀರನೆ " ನಾವು ಇವತ್ತು ಇನ್ನೇನೂ ಮಾಡೋದಿಲ್ವಾ" ಎಂದು ಕೇಳಿ ನನ್ನನ್ನು ಚಕಿತಗೊಳಿಸಿತು. ಅವನು ಚಟುವಟಿಕೆಗಳತ್ತ ನನ್ನ ಗಮನವನ್ನು ಸೆಳೆದಿದ್ದ. "ಏನಾದರೂ ಮಾಡೋಣ" ಎನ್ನುತ್ತಾ ಅನೇಕ ಮಕ್ಕಳು ದನಿಗೂಡಿಸಿದರು. "ನಾವು ಹೀಗೆ ಮಾಡೋಣ" (ಅವರು ಅಂಗಾಂಗಗಳನ್ನು ಚಲಿಸುತ್ತಾ ಲಘು ವ್ಯಾಯಾಮವನ್ನು ಸೂಚಿಸುತ್ತಿದ್ದರು). ನನಗೆ ಅದರಿಂದ ಉತ್ತೇಜನ ಸಿಕ್ಕಿತು, ಏಕೆಂದರೆ ಕೆಲವೊಂದು ಅಭ್ಯಾಸಗಳು ಒಮ್ಮೆ ಚೆನ್ನಾಗಿ ಆರಂಭವಾದ ಮೇಲೆ ಅವುಗಳನ್ನು ಮುನ್ನಡೆಸಿಕೊಂಡು ಹೋಗಲು ಅದರಲ್ಲಿ ಭಾಗವಹಿಸುವವರ ಉತ್ಸಾಹ ಅಗತ್ಯವಾಗಿರುತ್ತದೆ ಮತ್ತು ನನ್ನೊಡನೆ ಮಾತನಾಡಲು, ತೊಡಗಿಕೊಳ್ಳಲು ಹಿಂಜರಿಯುತ್ತಿದ್ದ ಹಾಗೂ ತಮ್ಮ ತರಗತಿ ಶಿಕ್ಷಕರನ್ನು ಬಿಟ್ಟು ಉಳಿದ ಯಾರ ಮಾತನ್ನೂ ಕೇಳದೇ ಇದ್ದ ಮಕ್ಕಳು ಈಗ ನನ್ನೊಂದಿಗೆ ಭಯ, ಸಂಕೋಚ ಮತ್ತು ಹಿಂಜರಿಕೆ ಇಲ್ಲದೆ ಮಾತನಾಡುತ್ತಿದ್ದರು. ತರಗತಿಯು ನಿಶ್ಯಬ್ದವಾಗಿ ಇರಬೇಕೆಂಬ ಸಾಂಪ್ರದಾಯಿಕ ಕಲ್ಪನೆಯನ್ನು ಮುರಿಯುವ ಅಂಥ ಚಟುವಟಿಕೆಗಳನ್ನು ಮಾಡುವುದು ಮಕ್ಕಳನ್ನು ಹೇಗೆ ನಿರಾತಂಕ ಸ್ಥಿತಿಗೆ ತರುತ್ತದೆ ಎಂಬುದು ನನಗೆ ಮನವರಿಕೆಯಾಯಿತು. ಮಕ್ಕಳು ಒಂದು ಸ್ಥಳದಲ್ಲಿ ತಾವು ಸುರಕ್ಷಿತವಾಗಿದ್ದೇವೆ ಎಂಬ ಭಾವವನ್ನು ಅನುಭವಿಸಿದರೆ, ಆ ಜಾಗ ತಮ್ಮದು ಎಂದು ಭಾವಿಸಿದರೆ ಮೊದಲಿಗೆ ಅವರಿಗೆ ನಿಯತವಾಗಿ ಶಾಲೆಗೆ ಹಾಜರಾಗುವಂತಹ ಶಾಲಾ ಪ್ರಕ್ರಿಯೆಗಳಲ್ಲಿ ಆಸಕ್ತಿ ಮೂಡುತ್ತದೆ ಮತ್ತು ಕ್ರಮೇಣ ಬೋಧನೆ-ಕಲಿಕೆಯ ಪ್ರಕ್ರಿಯೆಯಲ್ಲಿ ಭಾಗವಹಿಸುವುದೂ ಉತ್ತಮಗೊಳ್ಳುತ್ತದೆ, ಹೀಗೆ ಶಾಲೆಯ ಪ್ರಕ್ರಿಯೆಗಳ ಬಗ್ಗೆ ಸಮಗ್ರವಾಗಿ ಆಸಕ್ತಿ ಹುಟ್ಟುವ ಹಾದಿ ಸುಗಮವಾಗುತ್ತದೆ ಎನ್ನುವುದನ್ನು ನಾನು ಗಮನಿಸಿದೆ. ಮತ್ತೊಂದು ಸಂದರ್ಭದಲ್ಲಿ ಎಲ್ಲಾ ಮಕ್ಕಳೂ ಪದ್ಯ ಓದಲು ವೃತ್ತಾಕಾರದಲ್ಲಿ ಉತ್ಸಾಹದಿಂದ ನಿಂತಿದ್ದಾಗ ಅಮನ್* ಎಂಬ ಹುಡುಗ ನನ್ನ ಬಳಿಗೆ ಬಂದು-ಅವನಿಗೆ ಆರೋಗ್ಯ ಸರಿ ಇದ್ದಂತಿರಲಿಲ್ಲ-ನಾನು ಕುಳಿತುಕೊಳ್ಳಬಹುದೇ ಎಂದು ಕೇಳಿದ. ನಾನು ಅವನು ಕುಳಿತುಕೊಂಡೇ ಪದ್ಯವನ್ನು ಕೇಳಬಹುದು ಎಂದು ಹೇಳಿದೆ. ಈ ಘಟನೆ ಕೂಡ ಮಗು ನನ್ನ ಬಳಿ ಬಂದು ಮಾತನಾಡಲಾಗುವಂತೆ ಸುರಕ್ಷಿತ ಭಾವನೆ ಬರುವಂಥ ವಾತಾವರಣವನ್ನು ಸೃಷ್ಟಿಸಲಾಗಿದೆ ಎಂಬುದನ್ನು ತೋರಿಸಿತು ಮತ್ತು ಮಗುವಿಗೆ ತನ್ನ ಭಾವನೆಗಳನ್ನು ಗುರುತಿಸಿಕೊಳ್ಳಲು ಸಾಧ್ಯವಾಯಿತು ಎಂಬುದು ವಿಶೇಷ ಸಂಗತಿ. ಏಕೆಂದರೆ ವೇಗವಾಗಿ ಚಲಿಸುತ್ತಿರುವ ಇಂದಿನ ಜಗತ್ತಿನಲ್ಲಿ ನಾವೂ ಸಹ ನಮ್ಮ ಅವಶ್ಯಕತೆಗಳನ್ನು ಗುರುತಿಸಿಕೊಂಡಿರುವುದಿಲ್ಲ ಎಂಬುದನ್ನು ಅದು ನನಗೂ ನೆನಪಿಸಿತು. ಭಾಗವಹಿಸದೆ ಸುಮ್ಮನೆ ಕೂಡುವ ಬದಲು ಈ ಮಗು ತನ್ನ ಅವಶ್ಯಕತೆಯನ್ನು ಅಭಿವ್ಯಕ್ತಿಸಿತ್ತು. ನನ್ನ ಪಾಲಿಗೆ ವೈಯಕ್ತಿಕವಾಗಿ ಇದೊಂದು ಆತ್ಮಾವಲೋಕನದ ಹಾಗೂ ಕಲಿಕೆಯ ಘಳಿಗೆಯಾಗಿತ್ತು.

## ಪಾತ್ರಾಭಿನಯದ ಮೂಲಕ ಗಣಿತವನ್ನು ಕಲಿಯುವುದು

ಅತ್ಯುತ್ತಮವಾದ ರೀತಿಯಲ್ಲಿ ಮಕ್ಕಳ ಶಕ್ತಿ, ಉತ್ಸಾಹ ಮತ್ತು ಏಕಾಗ್ರತೆಗಳು ದೀರ್ಘಾವಧಿಯವರೆಗೆ ಉಳಿಯುವಂತೆ ಮಾಡಲು, ಒಂದು ಪರಿಕಲ್ಪನೆಯ ಸುತ್ತ ಅನೇಕ ಚಟುವಟಿಕೆಗಳು ಇರುವ ಹಾಗೆ ನಾನು ನನ್ನ ಪಾಠ ಯೋಜನೆಯನ್ನು ತಯಾರಿಸಿಕೊಳ್ಳುತ್ತೇನೆ. ಇಲಿಯನ್ನು ಕುರಿತು ಒಂದು ಪದ್ಯವನ್ನು ಓದುವಾಗ ನಾವು ಇಲಿ ಮತ್ತು ಬೆಕ್ಕುಗಳ ಪಾತ್ರವನ್ನು ಅಭಿನಯಿಸಿದೆವು. ನಾನು ಮೊದಲು ಮಕ್ಕಳಿಗೆ ಬೆಕ್ಕುಗಳಾಗಿ ಮತ್ತು ಇಲಿಗಳಾಗಿ ನಟಿಸಲು ಹೇಳಿದೆ. ಆದರೆ ಅವರಿಗೆ ನನ್ನ ನಿರೀಕ್ಷೆ ಏನಿತ್ತು ಎಂಬುದರ ಬಗ್ಗೆ ಕಲ್ಪನೆಯೇ ಇರದಿದ್ದುದರಿಂದ ನಾನು ಬೆಕ್ಕಿನ ಪಾತ್ರವನ್ನು ವಹಿಸಿಕೊಂಡು ಮಕ್ಕಳು ಇಲಿಗಳಾಗಿ ನನ್ನ ಸುತ್ತಲೂ ಓಡಲು ಹೇಳಿದೆ. ಈ ಆಟದಲ್ಲಿ ಬೆಕ್ಕು (ನಾನು) ಇಲಿಗಳನ್ನು (ಮಕ್ಕಳನ್ನು) ಹಿಡಿಯಬೇಕಿತ್ತು ಮತ್ತು ಬೆಕ್ಕು ಯಾರನ್ನೇ ಮುಟ್ಟಿದರೂ ಅವರು ಔಟಾಗುತ್ತಿದ್ದರು. ಔಟಾದವರು ನಿಶ್ಚಲವಾಗಿ ಮಲಗ-ಬೇಕಾಗುತ್ತಿತ್ತು. ಹೆಚ್ಚು ಚಟುವಟಿಕೆಯಿಂದಿದ್ದ ಮಕ್ಕಳಿಗೆ ನಾನು ಓಡದೆ ತೆವಳಬೇಕೆಂದು ಹೇಳಿದೆ. ನಂತರ ನನ್ನ ಜಾಗದಲ್ಲಿ ಇನ್ನೊಂದು ಮಗು "ಬೆಕ್ಕು" ಆಯಿತು. ಸ್ವಲ್ಪ ಸಮಯದಲ್ಲೇ ಹತ್ತು ಜನ 'ಔಟ್' ಆಗಿದ್ದರು ಮತ್ತು ಮೂರು ಮಂದಿ 'ನಾಟ್ ಔಟ್' ಆಗಿದ್ದರು ಮತ್ತು ಆಟದಲ್ಲಿ ಒಂದು ಬೆಕ್ಕು ಉಳಿದಿತ್ತು. ನಾನು ಆ ಮೂರು ಜನ 'ನಾಟ್ ಔಟ್' ಮಕ್ಕಳನ್ನೂ ಮಲಗಿರುವಂತೆ ನಟಿಸಲು ಹೇಳಿದೆ, 'ಔಟ್' ಆಗಿದ್ದವರು ಒಟ್ಟು ಇಲಿಗಳ ಸಂಖ್ಯೆಯನ್ನು ಎಣಿಸಿದರು.

ಆರಂಭದಲ್ಲಿ ಒಂದನೇ ತರಗತಿಯ ಮಕ್ಕಳು ಒಬ್ಬೊಬ್ಬರನ್ನೇ ಮುಟ್ಟಿ ಎಣಿಸುತ್ತಾ, ತಮ್ಮನ್ನು ಮರೆತುಬಿಟ್ಟು ಒಟ್ಟು ಸಂಖ್ಯೆ ಒಂಭತ್ತು ಎನ್ನುತ್ತಿದ್ದರು. ಅದರಲ್ಲಿ ಎರಡನೇ ತರಗತಿಯ ಇಬ್ಬರು ಮಕ್ಕಳಿದ್ದು, ಅವರು ಒಂಭತ್ತನ್ನು ಸರಿಯಾಗಿ ಎಣಿಸಿ ನಂತರ ಅದರೊಂದಿಗೆ ತಾವೂ ಔಟ್ ಆಗಿದ್ದರಿಂದ ತಮ್ಮನ್ನೂ

ಸೇರಿಸಿಕೊಂಡು ಎಣಿಸಿದರು. ಏಳು ಮಕ್ಕಳು ಮೂಲಾಂಕ ನಿಯಮ (cardinality principle - ಎಂದರೆ ಎಣಿಕೆಯ ಪ್ರಕ್ರಿಯೆಯಲ್ಲಿ ಅಂತಿಮವಾಗಿ ಹೇಳುವ ಸಂಖ್ಯೆಯು ಎಲ್ಲ ವಸ್ತುಗಳನ್ನೂ ಒಳಗೊಂಡಿರಬೇಕು ಎಂಬ ತತ್ತ್ವ)ವನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದರು ಮತ್ತು ಉಳಿದ ಮಕ್ಕಳೂ ಸಹ ಚಟುವಟಿಕೆಯ ನಂತರ ಈ ಮೂಲಾಂಕ ನಿಯಮವನ್ನು ಸುಲಭವಾಗಿ ಗ್ರಹಿಸುತ್ತಾರೆ ಎಂಬುದು ನನ್ನ ನಿರೀಕ್ಷೆ. ನಾನು ನಿಯತವಾಗಿ ಈ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಮೇಲೆ ಇವು ಮಕ್ಕಳಿಗೆ ತಮ್ಮದೇ ವೇಗದಲ್ಲಿ ಹೊಸ ವಿಷಯಗಳನ್ನು ಕಲಿಯಲು ಅವಕಾಶ ಮಾಡಿಕೊಡುತ್ತವೆ ಎಂಬುದನ್ನು ಗ್ರಹಿಸಿದ್ದೇನೆ. ಮಕ್ಕಳ ಸರ್ವಾಂಗೀಣ ಬೆಳವಣಿಗೆ ಮತ್ತು ಅಭಿವೃದ್ಧಿಗೆ ಹಾದಿ ಮಾಡಿಕೊಡುವ ಪ್ರಯೋಗಾತ್ಮಕ (experimental) ಮತ್ತು ಅನುಭವಾತ್ಮಕ ಕಲಿಕೆಗೆ (experiential learning) ಸೂಕ್ತ ವಾತಾವರಣವನ್ನು ಇದು ಸೃಷ್ಟಿಸುತ್ತದೆ.

*ಮಕ್ಕಳ ಗುರುತನ್ನು ಗೌಪ್ಯವಾಗಿಡಲು ಹೆಸರುಗಳನ್ನು ಬದಲಾಯಿಸಲಾಗಿದೆ.



ಮಧುಮಿತಾ ಆರ್. ಅವರು ಮಧ್ಯಪ್ರದೇಶದ ಸಾಗರ್‌ನಲ್ಲಿ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಅಸೋಸಿಯೇಟ್ ಆಗಿದ್ದಾರೆ. ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಇವರು ಶಾಲೆಗಳಲ್ಲಿ ಮಕ್ಕಳೊಂದಿಗೆ ಓದುವುದು, ಬರೆಯುವುದು, ನಾಟಕ ಮುಂತಾದ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವುದನ್ನು ಇಷ್ಟಪಡುತ್ತಾರೆ. ಅವರನ್ನು mathumitha.r@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: **ಬಿ.ಆರ್.ಮಂಜುನಾಥ್** | ಪರಿಶೀಲನೆ: **ನಾಗಮಣಿ ಎಸ್.ಎನ್.**